ಡಾ॥ ಎಂ. ಎಂ. ಕಲಬುರ್ಗಿ

# ದಂಡಿನ ದಾರಿ

ಶಿವಶರಣರು ಕಲ್ಯಾಣದಿಂದ ಉಳಿವೆಗೆ ಬಂದ ದಾರಿಯ ಸಮಗ್ರ ಶೋಧ ಇನ್ನೂ ನಡೆಯಬೇಕಾಗಿದೆ. ೮೦೦ ವರ್ಷ ಕಳೆದರೂ ಈ ದಾರಿಯನ್ನು ಅಕ್ಕ ಪಕ್ಕದ ಹಳ್ಳಿಯ ಜನ 'ದಂಡಿನ ದಾರಿ' ಎಂದು ನೆನಪಿಟ್ಟು ಕರೆಯುತ್ತಿರುವುದು ಅದರ ಐತಿಹಾಸಿಕ ಮಹತ್ವಕ್ಕೆ ನಿದರ್ಶನವೆನಿಸಿದೆ.

ಜನಪರ ಮೌಲ್ಯ ಸ್ಥಾಪನೆಗಾಗಿ ದನಿಯೆತ್ತಿದ ಶರಣರು, ರಾಜನ ಸೈನ್ಯದಿಂದ ಅಟ್ಟಿಸಿಕೊಂಡು ಉಳಿವೆಯವರೆಗೆ ನೆತ್ತರು ಸುರಿಸುತ್ತ ಸಾಗಿ ಬಂದ ಈ 'ಹುತಾತ್ಮರ ಹಾದಿ' ನಮ್ಮ ರಾಷ್ಟ್ರದ ಇತಿಹಾಸದಲ್ಲಿಯೇ ಒಂದು ಐತಿಹಾಸಿಕ ಮಾರ್ಗವೆನಿಸಿದೆ. ಈ ಮಾರ್ಗ ಸಂಶೋಧನೆಗೆ ಜನಪದಂತಿ, ಐತಿಹಾಸಿಕ ಕುರುಹುಗಳನ್ನು ಬಿಟ್ಟರೆ ನಮಗೆ ನೆರವಾಗುವ ಸಾಹಿತ್ಯ ಕೃತಿಗಳು ನಾಲ್ಕು: ಚನ್ನಬಸವ ಪುರಾಣ, ಕಾಲಜ್ಞಾನ ವಚನ, ಶರಣಲೀಲಾಮೃತ, ರೇಚಣ್ಣನ ವಚನ,

ಇವುಗಳಲ್ಲಿ ಕಾಲಜ್ಞಾನ ವಚನವು ಕಲ್ಯಾಣ, ಗೊಡಚಿ, ಕೊಡಕೋಳ, ಮೊದಲೂರು, ತವಲೂರು, ಮುರಗೋಡ, ಮೂಗಬಸವ, ಕಾದರವಳ್ಳಿ, ಸಾಂಬ್ರಾಣಿ, ಮೇಲುಗೈಯ ಯಲ್ಲಾಪುರ, ಉಳಿವೆ ಎಂದೂ, ಚನ್ನಬಸವಪುರಾಣವು ಕಲ್ಯಾಣ, ತೊರಗಲ್ಲು, ತಡಕೋಡ, ಕಾದರವಳ್ಳಿ, ಮುರಗೋಡ, ಉಳಿವೆಯೆಂದೂ, ಶರಣಲೀಲಾಮೃತವು ಕಲ್ಯಾಣ, ತಡಕೋಡ, ಮುರಗೋಡ, ಮೂಗಬಸವ, ಗೊಡಚಿ, ಉಳಿವೆಯೆಂದೂ, ರೇಚಣ್ಣನ ವಚನವು ಕಲ್ಯಾಣ, ಕಾದರವಳ್ಳಿ, ಮುರಗೋಡ, ಉಳಿವೆಯೆಂದೂ ಈ ದಾರಿಯ ಮೇಲಿನ ಊರುಗಳನ್ನು ಸೂಚಿಸುತ್ತವೆ. ನೋಡಲಿಕ್ಕೆ ನಾಲ್ಕು ಕೃತಿಗಳಾದರೂ ಇವು ಒದಗಿಸುವ ವಿವರ ಸ್ವಲ್ಪ ಹೆಚ್ಚು ಕಡಿಮೆ ಒಂದೇ ಬಗೆಯಾಗಿದೆ. ಇವುಗಳಲ್ಲಿ ಕಾಲಜ್ಞಾನ ವಚನವು ಕಲ್ಯಾಣದ ತರುವಾಯ ಒಮ್ಮೆಲೇ ರಾಮದುರ್ಗ ತಾಲೂಕಿನ ಗೊಡಚಿಯನ್ನೂ, ಶರಣಲೀಲಾಮೃತವು ಬೈಲಹೊಂಗಲ ತಾಲೂಕಿನ ಕಾದರವಳ್ಳಿಯನ್ನೂ, ರೇಚಣ್ಣನ ವಚನವು ಧಾರವಾಡ ತಾಲೂಕಿನ ತಡಕೋಡನ್ನೂ, ಚೆನ್ನಬಸವಪುರಾಣವು ರಾಮದುರ್ಗ ತಾಲೂಕಿನ ತೊರಗಲ್ಲನ್ನೂ ಸೂಚಿಸುತ್ತವೆ. ಹೀಗಾಗಿ ಕಲ್ಯಾಣದಿಂದ ಈ ಊರುಗಳವರೆಗೆ ಶರಣರು ಯಾವ ಯಾವ ಗ್ರಾಮಗಳ ಮೂಲಕ ಹೊರಟುಬಂದರೆಂಬ ಸೂಚನೆ ಈ ವರೆಗೂ ಲಭ್ಯವಾಗಿರಲಿಲ್ಲ. ಅಂದರೆ ಈ ದಂಡಿನದಾರಿಯ ಪೂರ್ವಾರ್ಧ ಪತ್ತೆಯಾಗಿರಲಿಲ್ಲ. ಈ ಪೂರ್ವಾರ್ಧ ದಾರಿಯನ್ನು ಸೂಚಿಸುತ್ತ ಉತ್ತರಾರ್ಧ ದಾರಿಯನ್ನು ಸ್ವಲ್ಪ ಭಿನ್ನವಾಗಿ ಹೇಳುವ 'ಉಳಿವೆಯ ಮಹಾತ್ಮೆ' ಹೆಸರಿನ ಕೃತಿಯೊಂದು ಕನ್ನಡ ಅಧ್ಯಯನ ಪೀಠದ ಹಸ್ತಪ್ರತಿ ಭಾಂಡಾರದಲ್ಲಿದೆ. (ಈ ಕೃತಿಯತ್ತ ನನ್ನ ಗಮನ ಸೆಳೆದ ಡಾ. ಬಿ.ಆರ್. ಹಿರೇಮಠ ಅವರಿಗೆ ಕೃತಜ್ಞ). ಇದರ ಕರ್ತೃ ಸೋದೆಯ ಅರಸು ಸದಾಶಿವರಾಯ (೧೬೭೪–೯೭). ಬೆಳವಡಿ ಮಲ್ಲಮ್ಮನ ಸೋದರನಾದ ಇವನು ಮಹಾಶಿವಭಕ್ತನಾಗಿದ್ದನು. ತನ್ನ ಗ್ರಂಥಗಳಲ್ಲಿ "ಶ್ರೀ ಮನ್ಮಹಾವೀರಮಾಹೇಶ್ವರಾಚಾರ್ಯ ಮಳೆಯಗುರು ನಂದೀಶನ ಕರುಣ ಸಂಜಾತ" ಎಂದು ಕರೆದುಕೊಂಡಿರುವ ಈತನು, ಬನವಾಸಿಯ ಮಧುಕೇಶ್ವರ ದೇವಾಲಯಕ್ಕೆ ತ್ರಿಲೋಕ ಮಂಟಪವನ್ನು ಕಾಣಿಕೆಯಾಗಿ

ನೀಡಿದ್ದು, ಇದರ ಸುತ್ತಲೂ ಶರಣರ ವಿಗ್ರಹಗಳನ್ನು ಕಂಡರಿಸಲಾಗಿದೆ.

ಹೀಗೆ ಶರಣರ ಬಗ್ಗೆ ಅಪಾರ ಭಕ್ತಿಯುಳ್ಳ ಈತನ 'ಉಳಿವೆ ಮಹಾತ್ಮೆ' ಶರಣರು ಕಲ್ಯಾಣದಿಂದ ಉಳಿವೆಗೆ ಬಂದ ದಾರಿಯ ಮೇಲಿನ ಊರುಗಳನ್ನು ಹೀಗೆ ಹೇಳುತ್ತದೆ : ಕಲ್ಯಾಣ–ಪರವತಾಬಾದ (ಗುಲಬರ್ಗಾ ತಾಲೂಕು)–ಪೇರಜಾಬಾದ (=ಫಿರೋಜಾಬಾದ ಗುಲಬರ್ಗಾ ತಾ.)–ಕೋಳಕೂರ (ಜೇವರಗಿ ತಾ.)–ಬಡದಳ (ತಾಲೂಕು ?), ಸತ್ತಿಗ್ಗೆರೆ (ಸವದತ್ತಿ ತಾ.)–ಮುರಗೋಡ (ಸವದತ್ತಿ ತಾ.) ಹುಬ್ಬಳ್ಳಿ–ಬಂಕಾಪುರ–ಹಾನಗಲ್ಲ–ಮುಳಂಗೆ (=ಮುಳಗಿ, ಮುಂಡಗೋಡ ತಾ.)–ಜಾಂಗಲಿಕ್ಷೇತ್ರ (=ಜಗಳಬೆಟ್ಟ ? ಸೂಪಾ ತಾ.)–ಸೋದೆ (=ಸೊಂದಾ, ಸಿರ್ಸಿ ತಾ.)–ತುಂಬೆಬೀಡು (ಯಲ್ಲಾಪೂರ ತಾ.) ಯಲ್ಲಾಪೂರ–ಬೆನಕನ ಘಟ್ಟ (ಯಲ್ಲಾಪೂರ ತಾ.) ಅಂಜನಾನದಿ (=ಕಾಳಿನದಿ)–ಮಲ್ಲಾಪೂರ (ತಾ?), ಜನಿಪರ್ವತ (ತಾ?)–ಬಿದುರೆಪುರ (=ಬಿದರಹಳ್ಳಿ ಯಲ್ಲಾಪೂರ ತಾ.)–ಹೆಬ್ಬಾಳ ಪಳ್ಳಿ (=ಹೆಬ್ಬಳ್ಳಿ, ಸಿರ್ಸಿ ತಾ.)–ಉಳಿವೆ (ಸೂಪಾ ತಾ.) ಹೀಗೆ ವಿವರಗಳನ್ನು ನೀಡುವ ಈ ಕೃತಿಯ ಮೂಲಕ ದಂಡಿನದಾರಿಯ ಪೂರ್ವಾರ್ಧದ ಕೆಲವು ಗ್ರಾಮಗಳು ಪ್ರಥಮ ಸಲ ತಿಳಿದುಬರುತ್ತವೆ. ಗುಲಬರ್ಗಾ ಜಿಲ್ಲೆಗೆ ಸಂಬಂಧಿಸಿದ ಪರ್ವತಾಬಾದ, ಫಿರೋಜಾಬಾದ, ಕೋಳಕೂರ, ಬಡದಳ ಈ ಗ್ರಾಮಗಳಲ್ಲಿ, ಅದೇರೀತಿ ಮುಂದಿನ ಗ್ರಾಮಗಳಲ್ಲಿ ಶೋಧ ನಡೆಯಬೇಕಾಗಿದೆ.

ಸೋದೆಯ ಅರಸರು ಉಳಿವೆಯ ಪರಮ ಭಕ್ತರು. 'ಉಳಿವೆ ಚೆನ್ನಬಸವೇಶ್ವರನ ವಾರ್ಧಕ' ಹೆಸರಿನ ಅಪ್ರಕಟಿತ ಕೃತಿಯಲ್ಲಿ ಇವರು ಚೆನ್ನಬಸವೇಶ್ವರನ ಜಾತ್ರೆ ನಡೆಸುತ್ತಿದ್ದುದನ್ನು 'ಸುಧಾಪುರದರಸು ಮಾಳ್ಪ ಬಂಧುರ ಬಸವೇಶ್ವರನುತ್ಸವ' ಎಂಬ ಮಾತಿನ ಮೂಲಕ ಸೂಚಿಸಲಾಗಿದೆ. ಹೀಗೆ ಶರಣರ ಬಗ್ಗೆ, ಉಳಿವೆ ಬಗ್ಗೆ ವಿಶೇಷ ಭಕ್ತಿಯುಳ್ಳ ಈ ರಾಜಮನೆತನದ ಸದಾಶಿವರಾಯ ಹೇಳುವ ಈ ಗ್ರಾಮಗಳನ್ನು ನಾವು ನಂಬಬಹುದಾಗಿದೆ. ಈಗ ಈ ಎಲ್ಲ ಕೃತಿಗಳಲ್ಲಿ ಸೂಚಿತವಾದ ಗ್ರಾಮಗಳಲ್ಲಿ ಶೋಧ ನಡೆಸಿ, ದಂಡಿನದಾರಿಯನ್ನು ಇನ್ನೂ ಸ್ಪಷ್ಟವಾಗಿ, ಸಮಗ್ರವಾಗಿ ಗುರುತಿಸಬೇಕಾಗಿದೆ.